# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಮೊದಲನೇ ಅಧಿವೇಶನ)
(ಮುಂದುವರೆದ ಉಪವೇಶನ)

## ಕಾರ್ಯಕಲಾಪಗಳ ಪಟ್ಟಿ

ಮಂಗಳವಾರ, ದಿನಾಂಕ 30ನೇ ಜುಲೈ, 2013
(ಸಮಯ: ಬೆಳಗ್ಗೆ 11.00 ಗಂಟೆಗೆ)

-----

### 1. ವಿತ್ತೀಯ ಕಾರ್ಯಕಲಾಪಗಳು

2013-14ನೇ ಸಾಲಿನ ಪರಿಷ್ಕೃತ ಆಯವ್ಯಯ ಅಂದಾಜುಗಳ ಮೇಲೆ ನಡೆದ ಸಾಮಾನ್ಯ ಚರ್ಚೆಗೆ ಹಾಗೂ ಬೇಡಿಕೆಗಳ ಮೇಲಿನ ಚರ್ಚೆಗೆ ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

| ಬೇಡಿಕೆ ಸಂಖ್ಯೆ | ಬೇಡಿಕೆಗಳ ಹೆಸರು |
|---|---|
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 24 | ಇಂಧನ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನಸೇವೆಗಳು |
| 17 | ಶಿಕ್ಷಣ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ |
| 07 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ |
| 14 | ಕಂದಾಯ |
| 20 | ಲೋಕೋಪಯೋಗಿ |
| 05 | ಒಳಾಡಳಿತ ಮತ್ತು ಸಾರಿಗೆ |
| 09 | ಸಹಕಾರ |
| 16 | ವಸತಿ |
| 19 | ನಗರಾಭಿವೃದ್ಧಿ |
| 21 | ಜಲಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |

ಪು.ತಿ.ನೋ.,

| | |
|---|---|
| 10 | ಸಮಾಜ ಕಲ್ಯಾಣ |
| 15 | ಮಾಹಿತಿ ತಂತ್ರಜ್ಞಾನ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 01 | ಕೃಷಿ ಮತ್ತು ತೋಟಗಾರಿಕೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 25 | ಕನ್ನಡ ಮತ್ತು ಸಂಸ್ಕೃತಿ |
| 23 | ಕಾರ್ಮಿಕ |

## 2. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಹದಿಮೂರನೇ ಪಟ್ಟಿ**

**ಆ) ದಿನಾಂಕ: 23ನೇ ಜುಲೈ, 2013ರ ಎಂಟನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀ ಬಸವರಾಜ ರಾಯರೆಡ್ಡಿ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:118(639) : ಮುಖ್ಯಮಂತ್ರಿಗಳು**

**ಇ) ದಿನಾಂಕ: 23ನೇ ಜುಲೈ, 2013ರ ಎಂಟನೇ ಪಟ್ಟಿಯಿಂದ ತಡೆಹಿಡಿಯಲಾದ ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾಸಾಹೇಬ್ ಅವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:120(906) : ಗೃಹ ಸಚಿವರು**

**ಈ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಹದಿಮೂರನೇ ಪಟ್ಟಿ**

## 3. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಶ್ರೀ ಸಿದ್ಧರಾಮಯ್ಯ (ಮುಖ್ಯಮಂತ್ರಿಗಳು) ಅವರು ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ 2013ನೇ ಸಾಲಿಗೆ ಸಂಬಂಧಿಸಿದಂತೆ ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ನೀಡಿರುವ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಮೇಲಿನ ಕಾರ್ಯನಿರ್ವಹಣಾ ಲೆಕ್ಕ ಪರಿಶೋಧನೆ ವರದಿ (ಸಂಖ್ಯೆ-7)ಯನ್ನು ಸಭೆಯ ಮುಂದಿಡುವುದು.

**ಮು.ತಿ.ನೋ.,**

# 4. ಗಮನ ಸೆಳೆಯುವ ಸೂಚನೆಗಳು

1. ಶ್ರೀ ಕೆ.ಎಸ್. ಪುಟ್ಟಣ್ಣಯ್ಯ ಅವರು ಕೃಷಿ ಪ್ರದೇಶದಲ್ಲಿ ಕೆಲಸ ಮಾಡುವ ಮಹಿಳೆಯರು ಹೆಚ್ಚಾಗಿ ಗರ್ಭಕೋಶದ ಕಾಯಿಲೆಗೆ ತುತ್ತಾಗುತ್ತಿರುವುದರಿಂದ ಅವರಿಗೆ ಉಚಿತ ಚಿಕಿತ್ಸೆಯನ್ನು ನೀಡುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

2. ಶ್ರೀ. ಕೆ. ವಸಂತ ಬಂಗೇರ ಅವರು ಉಜಿರೆ ಎಸ್.ಡಿ.ಎಂ ಕಾಲೇಜಿನ ವಿದ್ಯಾರ್ಥಿನಿ ಅಪರಿಚಿತರರಿಂದ ಅತ್ಯಾಚಾರಕ್ಕೊಳಗಾಗಿ ಕೊಲೆಯಾದ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

3. ಶ್ರೀ ಹೆಚ್.ಸಿ. ಬಾಲಕೃಷ್ಣ ಅವರು 2009-10ನೇ ಸಾಲಿನಲ್ಲಿ ಮಾಗಡಿ ತಾಲ್ಲೂಕು ಅಜ್ಜನಹಳ್ಳಿ ಗ್ರಾಮಪಂಚಾಯಿತಿಯಲ್ಲಿ ಉದ್ಯೋಗ ಖಾತ್ರಿ ಯೋಜನೆಯಡಿ ಕಾಮಗಾರಿಗಳು ಪೂರ್ಣಗೊಂಡಿದ್ದರೂ ಬಾಕಿ ಹಣ ಪಾವತಿ ಮಾಡದಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

4. ಶ್ರೀ ಕೆ.ಎಂ. ಶಿವಲಿಂಗೇಗೌಡ ಅವರು ರಾಜ್ಯದಲ್ಲಿ ಕಡ್ಡಾಯ ಶಿಕ್ಷಣ ಕಾಯ್ದೆಯಡಿ ಖಾಸಗಿ ಶಾಲೆಗಳಲ್ಲಿ ಬಡ ವಿದ್ಯಾರ್ಥಿಗಳಿಗೆ ಪ್ರವೇಶ ನೀಡದಿರುವುದರಿಂದ ಉಂಟಾಗುತ್ತಿರುವ ತೊಂದರೆಯ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

5. ಶ್ರೀ ವಿ. ಸುನೀಲ್ ಕುಮಾರ್ ಅವರು ಉಡುಪಿ ಜಿಲ್ಲೆಯ ಕೆಲವು ಗ್ರಾಮಗಳು ನಕ್ಸಲ್ ಪೀಡಿತವಾಗಿದ್ದು ಈ ಗ್ರಾಮಗಳ ಮೂಲಭೂತ ಸಮಸ್ಯೆಗಳ ನಿವಾರಣೆ ಬಗ್ಗೆ ಗೃಹ ಸಚಿವರ ಗಮನ ಸೆಳೆಯುವುದು.

6. ಶ್ರೀ ಎಸ್. ಮಧು ಬಂಗಾರಪ್ಪ ಅವರು ಬ್ರಹ್ಮರ್ಷಿ ನಾರಾಯಣ ಗುರುಗಳ ಜಯಂತಿಯನ್ನು ಸರ್ಕಾರದಿಂದ ಆಚರಿಸುವ ಮತ್ತು ಶಾಲಾ ಪಠ್ಯ ಪುಸ್ತಕಗಳಲ್ಲಿ ಸೇರಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

7. ಶ್ರೀ ಪಿ.ಆರ್. ಸುಧಾಕರ್ ಲಾಲ್ ಅವರು ರಾಜ್ಯದಲ್ಲಿ ಸರ್ವ ಶಿಕ್ಷಣ ಅಭಿಯಾನದಡಿಯಲ್ಲಿ ಸಮನ್ವಯ ಶಿಕ್ಷಣ ಸಂಪನ್ಮೂಲ ಶಿಕ್ಷಕರುಗಳನ್ನು ಕೆಲವು ಜಿಲ್ಲೆಗಳಲ್ಲಿ ನೇಮಿಸಿಕೊಳ್ಳದಿರುವುದರಿಂದ ಅಂಗವಿಕಲ ಮಕ್ಕಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರ ಗಮನ ಸೆಳೆಯುವುದು.

8. ಶ್ರೀ ಹೆಚ್.ಡಿ.ರೇವಣ್ಣ ಅವರು ಹಾಸನ ನಗರದ ಬಸ್ ನಿಲ್ದಾಣ ಹತ್ತಿರ ಚನ್ನಪಟ್ಟಣದ ಕೆರೆ ಅಂಗಳದಲ್ಲಿ ರೈಲ್ವೆ ನಿಲ್ದಾಣಕ್ಕಾಗಿ ಜಮೀನು ಮಂಜೂರಾಗಿದ್ದರೂ ಹಣ ಪಾವತಿಸದೆ ಕಾಮಗಾರಿ ಪ್ರಕ್ರಿಯೆ ಪ್ರಾರಂಭ ಮಾಡದಿರುವ ಬಗ್ಗೆ ಮಾನ್ಯ ಮೂಲಭೂತ ಸೌಲಭ್ಯ ಅಭಿವೃದ್ಧಿ ಮತ್ತು ವಾರ್ತಾ ಸಚಿವರ ಗಮನ ಸೆಳೆಯುವುದು.

9. ಶ್ರೀ ಬಿ.ಬಿ. ನಿಂಗಯ್ಯ ಅವರು ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲ್ಲೂಕು ಕಳಸ ಹೋಬಳಿಯ ಶ್ರೀ ಕಳಸೇಶ್ವರ ಸ್ವಾಮಿ ದೇವಾಲಯಕ್ಕೆ ಉಂಬಳಿ ಬಿಟ್ಟಿದ್ದ ಭೂಮಿಯನ್ನು ಅರಣ್ಯ ಇಲಾಖೆಗೆ ಹಸ್ತಾಂತರಿಸಬೇಕೆಂದು ಉಚ್ಚನ್ಯಾಯಾಲಯವು ತೀರ್ಪು ನೀಡಿರುವುದರಿಂದ ಬಡ ಕೃಷಿ ಕಾರ್ಮಿಕರಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

**ಪು.ತಿ.ನೋ.,**

10. ಶ್ರೀ ಜಿ.ಹೆಚ್. ಶ್ರೀನಿವಾಸ್ ಅವರು ಭದ್ರಮೇಲ್ದಂಡೆ ಸುರಂಗ ಮಾರ್ಗದ ಯೋಜನೆಯಿಂದ ತರೀಕೆರೆ ವಿಧಾನಸಭಾ ಕ್ಷೇತ್ರದಲ್ಲಿ ಅಂತರ್‌ಜಲ ಬತ್ತುವುದರಿಂದ ರೈತರಿಗೆ ತೊಂದರೆಯುಂಟಾಗಿರುವ ಹಾಗೂ ತಾಲ್ಲೂಕಿನ ಎಲ್ಲಾ ಗ್ರಾಮಗಳಿಗೆ ಶಾಶ್ವತ ಕುಡಿಯುವ ನೀರಿನ ಯೋಜನೆಯನ್ನು ಕೈಗೊಳ್ಳುವ ಬಗ್ಗೆ ಮಾನ್ಯ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

11. ಶ್ರೀ ಸಿ.ಬಿ. ಸುರೇಶ್‌ಬಾಬು ಅವರು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹಳ್ಳಿಗಳಲ್ಲಿ ಪ್ಲೋರೈಡ್‌ನಿಂದಾಗಿ ಕುಡಿಯುವ ನೀರಿನ ಸಮಸ್ಯೆಯುಂಟಾಗಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರ ಗಮನ ಸೆಳೆಯುವುದು.

12. ಶ್ರೀ ಬಿ.ಆರ್. ಪಾಟೀಲ್ ಅವರು ಮಹಾರಾಷ್ಟ್ರ ರಾಜ್ಯದಿಂದ ಗುಲ್ಬರ್ಗಾ ಜಿಲ್ಲೆಗೆ ಪ್ರತಿನಿತ್ಯ ಕಾನೂನು ಬಾಹಿರವಾಗಿ ಕಲಬೆರಕೆ ಹಾಲು ಪೂರೈಕೆಯಾಗುತ್ತಿರುವುದರಿಂದ ತೊಂದರೆಯುಂಟಾಗಿರುವ ವಿಷಯದ ಬಗ್ಗೆ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು ಹಾಗೂ ಸಂಸದೀಯ ವ್ಯವಹಾರಗಳು, ಶಾಸನ ರಚನೆ ಮತ್ತು ಪಶುಸಂಗೋಪನೆ ಸಚಿವರ ಗಮನ ಸೆಳೆಯುವುದು.

13. ಡಾ|| ಕೆ. ಸುಧಾಕರ್ ಅವರು ಬಿಹಾರ ರಾಜ್ಯದಲ್ಲಿ ಬಿಸಿಯೂಟ ಸೇವಿಸಿದ ಮಕ್ಕಳ ಪ್ರಾಣ ಹಾನಿಯಾಗಿದ್ದು ರಾಜ್ಯದಲ್ಲಿಯೂ ಸಹ ಇಂತಹ ಅವಘಡಗಳು ಸಂಭವಿಸದಿರುವ ರೀತಿ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಗಮನ ಸೆಳೆಯುವುದು.

14. ಶ್ರೀ ಈ ತುಕಾರಾಂ ಅವರು ಹೊಸಪೇಟೆ, ಸಂಡೂರು, ಹೆಚ್.ಬಿ.ಹಳ್ಳಿ, ಹಡಗಲಿ ಮತ್ತು ಕೂಡ್ಲಗಿ ತಾಲ್ಲೂಕುಗಳನ್ನು ಸೇರಿಸಿ ಹೊಸದಾಗಿ ವಿಜಯನಗರ ಜಿಲ್ಲೆ ಎಂದು ಘೋಷಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

15. ಶ್ರೀ ಎಸ್.ಆರ್. ಶ್ರೀನಿವಾಸ್ ಅವರು ಗುಬ್ಬಿ ಪಟ್ಟಣ ಪಂಚಾಯತಿ ವ್ಯಾಪ್ತಿಯಲ್ಲಿ ಯು.ಜಿ.ಡಿ. ಯೋಜನೆಯಡಿ ಸರ್ಕಾರದಿಂದ ಅನುದಾನ ಬಿಡುಗಡೆಯಾಗಿದ್ದರೂ ಯೋಜನೆಯ ಕಾಮಗಾರಿಗಳಿಗೆ ಟೆಂಡರ್ ಕರೆಯದಿರುವ ಬಗ್ಗೆ ಮಾನ್ಯ ಪೌರಾಡಳಿತ, ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಉದ್ದಿಮೆಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

16. ಶ್ರೀ ಪಿ. ಆರ್. ಸುಧಾಕರ್ ಲಾಲ್ ಅವರು ರಾಜ್ಯದ ವಿವಿಧ ಕಾರಾಗೃಹಗಳಲ್ಲಿ ಜೀವಾವಧಿ ಶಿಕ್ಷೆಯನ್ನು ಅನುಭವಿಸುತ್ತಿರುವ 14ವರ್ಷ ಮೇಲ್ಪಟ್ಟು ಶಿಕ್ಷೆಯನ್ನು ಪೂರೈಸಿರುವ ಖೈದಿಗಳನ್ನು ಸನ್ನಡತೆ ಆಧಾರದ ಮೇಲೆ ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

17. ಶ್ರೀಯುತರುಗಳಾದ ಹೆಚ್.ಡಿ.ರೇವಣ್ಣ ಮತ್ತು ಹೆಚ್.ಎಸ್. ಪ್ರಕಾಶ ಅವರುಗಳು 1996ರಲ್ಲಿ ಮಂಜೂರಾಗಿರುವ ಹಾಸನ- ಬೆಂಗಳೂರು ರೈಲ್ವೆ ಮಾರ್ಗ ನಿರ್ಮಾಣ ಕಾಮಗಾರಿ ವಿಳಂಬವಾಗುತ್ತಿರುವ ಬಗ್ಗೆ ಮಾನ್ಯ ಮೂಲಭೂತ ಸೌಲಭ್ಯ ಅಭಿವೃದ್ಧಿ ಮತ್ತು ವಾರ್ತಾ ಸಚಿವರ ಗಮನ ಸೆಳೆಯುವುದು.

18. ಶ್ರೀ ವಿ. ಸುನೀಲ್ ಕುಮಾರ್ ಅವರು ರಾಜ್ಯ ಸರ್ಕಾರದ ಬಸವ ವಸತಿ ಯೋಜನೆ ಹಾಗೂ ಕೇಂದ್ರ ಸರ್ಕಾರದ ಇಂದಿರಾ ಆವಾಸ್ ಯೋಜನೆಯಡಿ ಮನೆ ನಿರ್ಮಿಸಲು ಫಲಾನುಭವಿಗಳಿಗೆ ಮಂಜೂರಾತಿ ವಿಳಂಬವಾಗಿರುವುದರಿಂದ ಮತ್ತು ಕಾರ್ಕಳ ತಾಲ್ಲೂಕಿನಲ್ಲಿ 2011-12ನೇ ಸಾಲಿನಲ್ಲಿ ವಸತಿ ಯೋಜನೆಯಡಿ ಅನುದಾನ ಬಿಡುಗಡೆಯಾಗದೆ ತೊಂದರೆಯುಂಟಾಗುತ್ತಿರುವ ಬಗ್ಗೆ ಮಾನ್ಯ ವಸತಿ ಸಚಿವರ ಗಮನ ಸೆಳೆಯುವುದು.

19. ಶ್ರೀ ಕೆ.ಎಂ. ತಿಮ್ಮರಾಯಪ್ಪ ಅವರು ಪಾವಗಡ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದಿಂದ ಗುಡಿಸಲು ರಹಿತ ತಾಲ್ಲೂಕೆಂದು ಘೋಷಿಸಿರುವ ಹಿನ್ನೆಲೆಯಲ್ಲಿ ಆಯ್ಕೆ ಪಟ್ಟಿಯಿಂದ ಕೆಲವು ಫಲಾನುಭವಿಗಳನ್ನು ಕೈಬಿಟ್ಟಿರುವ ಬಗ್ಗೆ ಮಾನ್ಯ ವಸತಿ ಸಚಿವರ ಗಮನ ಸೆಳೆಯುವುದು.

20. ಡಾ॥ ಎಸ್ ಶಿವರಾಜ್ ಪಾಟೀಲ್ ಅವರು ರಾಯಚೂರು ಜಿಲ್ಲೆಯ ಮೊರಾರ್ಜಿ ದೇಸಾಯಿ, ಕಿತ್ತೂರು ರಾಣಿ ಚೆನ್ನಮ್ಮ ಮತ್ತು ಏಕಲವ್ಯ ಶಾಲೆಗಳಲ್ಲಿ ಕ್ರೈಸ್ ಸಂಸ್ಥೆಯ ವತಿಯಿಂದ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಶಿಕ್ಷಕರುಗಳನ್ನು ಖಾಯಂಗೊಳಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

21. ಡಾ॥ ಗುರುಪಾದಪ್ಪ ನಾಗಮಾರಪಳ್ಳಿ ಅವರು ಬೀದರ್ ಜಿಲ್ಲಾಡಳಿತವು ನಗರದಲ್ಲಿ ನಿರ್ಮಿಸಿರುವ 3000 ಮನೆಗಳನ್ನು ಅಕ್ರಮ ನಿರ್ಮಾಣವೆಂದು ಪರಿಗಣಿಸಿ ಮನೆಗಳನ್ನು ಒಡೆಯುವುದಾಗಿ ಮನೆ ಮಾಲೀಕರುಗಳಿಗೆ ನೋಟಿಸ್ ನೀಡಿರುವುದರಿಂದ ಉಂಟಾಗಿರುವ ಆತಂಕ ಪರಿಸ್ಥಿತಿಯ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

22. ಶ್ರೀ ಬಿ.ಎನ್. ವಿಜಯಕುಮಾರ್ ಅವರು ಬೆಂಗಳೂರಿನ ಜಯನಗರ ವಾಣಿಜ್ಯ ಸಂಕೀರ್ಣ ಕಾಮಗಾರಿಯನ್ನು ತ್ವರಿತಗತಿಯಲ್ಲಿ ಪೂರ್ಣಗೊಳಿಸುವ ಕುರಿತು ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

23. ಶ್ರೀ ಹೆಚ್.ಕೆ. ಕುಮಾರಸ್ವಾಮಿ ಅವರು ರಾಜ್ಯ ಹೆದ್ದಾರಿ ನಂ. 107 ರಸ್ತೆಯು ಹದಗೆಟ್ಟಿರುವುದರಿಂದ ಪ್ರಯಾಣಕ್ಕೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

24. ಶ್ರೀ ಸಂಜಯ ಬಿ. ಪಾಟೀಲ್ ಅವರು ಬೆಳಗಾವಿಯಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು ಸ್ಥಾಪಿಸುವ ಬಗ್ಗೆ ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಗಮನ ಸೆಳೆಯುವುದು.

25. ಶ್ರೀಯುತರುಗಳಾದ ಆರ್. ಅಶೋಕ ಮತ್ತು ಎಸ್. ಸುರೇಶ್‌ಕುಮಾರ್ ಅವರುಗಳು ರಾಜ್ಯದೆಲ್ಲೆಡೆ ಅವೈಜ್ಞಾನಿಕವಾಗಿ ಮೊಬೈಲ್ ಟವರ್‌ಗಳನ್ನು ಅಳವಡಿಸುತ್ತಿರುವುದರಿಂದ ಸಾರ್ವಜನಿಕರ ಮೇಲೆ ಆಗುತ್ತಿರುವ ದುಷ್ಪರಿಣಾಮಗಳ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

## 5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. ಶ್ರೀಯುತರುಗಳಾದ ಬಿ. ಸುರೇಶ್‌ಗೌಡ, ಕೆ.ಎನ್.ರಾಜಣ್ಣ, ಕೆ.ಎಂ.ಶಿವಲಿಂಗೇಗೌಡ ಮತ್ತು ಕೆ. ಷಡಕ್ಷರಿ ಅವರುಗಳು ಹೇಮಾವತಿ ಜಲಾಶಯದಿಂದ ನೀರನ್ನು ತುಮಕೂರು ಬ್ರಾಂಚ್ ಕೆನಾಲ್‌ಗೆ ಬಿಡುಗಡೆ ಮಾಡಿ ಕುಡಿಯುವ ನೀರು ಮತ್ತು ಕೃಷಿ ಚಟುವಟಿಕೆಗಳಿಗೆ ತುರ್ತಾಗಿ ಕ್ರಮಕೈಗೊಳ್ಳುವ ಬಗ್ಗೆ ಚರ್ಚೆ.

2. ಶ್ರೀಯುತರುಗಳಾದ ಜಿ.ಹೆಚ್.ಶ್ರೀನಿವಾಸ ಮತ್ತು ಬಿ. ಶಿವಣ್ಣ ಅವರುಗಳು ತರೀಕೆರೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಹಣ ಬಿಡುಗಡೆಯಾಗಿದ್ದರು ಕಾಮಗಾರಿ ಪ್ರಾರಂಭಿಸದಿರುವ ಬಗ್ಗೆ ಚರ್ಚೆ.

3. ಶ್ರೀಯುತರುಗಳಾದ ಹೆಚ್.ಡಿ. ಕುಮಾರಸ್ವಾಮಿ, ಎನ್.ಚಲುವರಾಯಸ್ವಾಮಿ ಮತ್ತು ಹೆಚ್.ಸಿ.ಬಾಲಕೃಷ್ಣ ಅವರುಗಳು ರಾಮನಗರ ತಾಲ್ಲೂಕು ಬಿಡದಿ ಹೋಬಳಿಯ ಬೈರಮಂಗಳ ಕೆರೆಗೆ ಬೆಂಗಳೂರು ಕೊಳಚೆ ನೀರು ಸೇರಿ ಜನ ಜಾನುವಾರುಗಳಿಗೆ ತೊಂದರೆಯುಂಟಾಗುತ್ತಿರುವುದರಿಂದ ಕೊಳಚೆ ನೀರಿನ ಶುದ್ಧೀಕರಣ ಘಟಕವನ್ನು ಪ್ರಾರಂಭಿಸಿ ಆ ಭಾಗದ ಜನರಿಗೆ ಶುದ್ಧ ಕುಡಿಯುವ ನೀರು ಮತ್ತು ನಿರಂತರ ವಿದ್ಯುತ್ ಸರಬರಾಜು ಮಾಡುವ ವಿಷಯದ ಬಗ್ಗೆ ಚರ್ಚೆ.

## 6. ಅರ್ಧ ಗಂಟೆ ಕಾಲಾವಧಿ ಚರ್ಚೆ

1. ಶ್ರೀ ಹೆಚ್.ಎಸ್. ಶಿವಶಂಕರ್ ಅವರು "ಆರೋಗ್ಯ ಕವಚ ಯೋಜನೆ" ಬಗ್ಗೆ ದಿನಾಂಕ: 25.07.2013 ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 10ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 138 (1262)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

2. ಶ್ರೀ ಕೆ.ಎಂ.ಶಿವಲಿಂಗೇಗೌಡ ಅವರು "ಕೆ.ಐ.ಎ.ಡಿ.ಬಿ. ಇಲಾಖೆಯಿಂದ ಜಮೀನು ನೀಡುವುದು" ಬಗ್ಗೆ ದಿನಾಂಕ: 23.07.2013 ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 8ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 106 (1043)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

3. ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ ಅವರು "ಕಲಂ 371ರಲ್ಲಿ ಬಿಜಾಪುರ ಜಿಲ್ಲೆಯನ್ನು ಸೇರ್ಪಡೆ ಮಾಡುವುದು" ಬಗ್ಗೆ ದಿನಾಂಕ: 23.07.2013 ರಂದು ಸದನದಲ್ಲಿ ಉತ್ತರಿಸುವ ಪ್ರಶ್ನೆಗಳ 8ನೇ ಪಟ್ಟಿಯಲ್ಲಿನ ಪ್ರಶ್ನೆ ಸಂಖ್ಯೆ: 107(1039)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

ಮು.ತಿ.ನೋ.,

4. ಶ್ರೀ ಶಿವಾನಂದ ಎಸ್ ಪಾಟೀಲ್ ಅವರು "ಬಿಜಾಪುರದಿಂದ ಬಾಗಲಕೋಟೆ ಹಾಗೂ ಬೆಂಗಳೂರಿಗೆ ಬರುವ ಮಾರ್ಗದಲ್ಲಿ ಆಲಮಟ್ಟಿ ಕೆಳಭಾಗದಲ್ಲಿರುವ ಎನ್.ಹೆಚ್- 13ರಲ್ಲಿ ಬರುವ ಹಳೆಯ ಕೃಷ್ಣಾ ಸೇತುವೆ ಸಂಪೂರ್ಣ ಹಾಳಾಗಿದ್ದು, ಸಂಚಾರ ಸ್ಥಗಿತಗೊಂಡಿರುವುದರಿಂದ ಸೇತುವೆ ದುರಸ್ತಿ ಮಾಡುವ" ಬಗ್ಗೆ ದಿನಾಂಕ: 29.07.2013 ರಂದು ಸದನದಲ್ಲಿ ಶೂನ್ಯ ವೇಳೆಯಲ್ಲಿ ಕೇಳಿದ ಪ್ರಶ್ನೆಗೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

**ಪಿ.ಓಂಪ್ರಕಾಶ**
ಕಾರ್ಯದರ್ಶಿ

*Raj N*

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(www.kar.nic.in/kla)